## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 84 |
| 2. | ಮಾನ್ಯ ಸದಸ್ಯರ ಹೆಸರು | ಶ್ರೀ ಎಂ.ಎ ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಚುನಾಯಿತರಾದವರು) |
| 3. | ಉತ್ತರಿಸಬೇಕಾದ ದಿನಾಂಕ | 01/02/2021 |
| 4. | ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಇಲ್ಲಿಯವರೆಗೆ ಕಾರ್ಮಿಕರ ವಂತಿಗೆಯಿಂದ ಸಂಗ್ರಹವಾಗಿರುವ ನಿಧಿಯ ಮೊತ್ತವೆಷ್ಟು ಈ ನಿಧಿಯನ್ನು ಯಾವ ಸಂಸ್ಥೆ ನಿರ್ವಹಣೆ ಮಾಡುತ್ತಿದೆ; (ವಿವರ ನೀಡುವುದು) | ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯು ದಿನಾಂಕ: 18-01-2007 ರಂದು ಅಸ್ತಿತ್ವಕ್ಕೆ ಬಂದಿದ್ದು, ಅಲ್ಲಿಂದ ಡಿಸೆಂಬರ್-2020 ರವರೆಗೆ ರೂ.39,68,47,651/- ಗಳ ಮೊತ್ತವು ಕಾರ್ಮಿಕರ ನೋಂದಣಿ ಮತ್ತು ನವೀಕರಣದಿಂದ ವಂತಿಗೆಯ ರೂಪದಲ್ಲಿ ಸಂಗ್ರಹವಾಗಿರುತ್ತದೆ. ಈ ಮೊತ್ತವನ್ನು ಮಂಡಳಿಯೇ ನಿರ್ವಹಿಸುತ್ತಿದೆ. |
| ಆ) | ಈ ನಿಧಿಯಿಂದ ಕಾರ್ಮಿಕ ವರ್ಗಕ್ಕೆ ಕಲ್ಪಿಸುತ್ತಿರುವ ಅಭಿವೃದ್ಧಿ ಯೋಜನೆಗಳು ಯಾವುವು; ಈ ಯೋಜನೆಗಳಿಗಾಗಿ ಇಲ್ಲಿಯವರೆಗೆ ಖರ್ಚಾಗಿರುವ ಮೊತ್ತವೆಷ್ಟು; (ಸಂಪೂರ್ಣ ವಿವರ ನೀಡುವುದು) | ಈ ನಿಧಿಯಿಂದ ಹಾಗೂ ಮಂಡಳಿಗೆ ಸಂಗ್ರಹವಾಗುವ ಸೆಸ್ ಮೊತ್ತದಿಂದ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ನೋಂದಾಯಿತರಾಗಿರುವ ಕಾರ್ಮಿಕರಿಗೆ 19 ವಿವಿಧ ಸೌಲಭ್ಯಗಳನ್ನು ನೀಡಲಾಗುತ್ತಿದ್ದು, ವಿವರಗಳನ್ನು **ಅನುಬಂಧ-1** ರಲ್ಲಿ ನೀಡಿದೆ. ಸದರಿ ಯೋಜನೆಗಳಿಗಾಗಿ ರೂ.769.19 ಕೋಟಿಯಷ್ಟು ಮೊತ್ತವನ್ನು ಖರ್ಚು ಮಾಡಿದ್ದು, ವಿವರವನ್ನು **ಅನುಬಂಧ-2** ರಲ್ಲಿ ನೀಡಿದೆ. |
| ಇ) | ಈ ಯೋಜನೆಗಳಲ್ಲಿ ಸಾಕಷ್ಟು ದುರುಪಯೋಗಗಳು ಆಗುತ್ತಿದ್ದು, ಸೌಲಭ್ಯಗಳು ಕಾರ್ಮಿಕರಿಗೆ ಸಕಾಲದಲ್ಲಿ ತಲುಪುತ್ತಿಲ್ಲವೆಂಬ ವಿಷಯವು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಈ ಸಂಬಂಧ ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | ಈ ಯೋಜನೆಗಳಲ್ಲಿ ಸಾಕಷ್ಟು ದುರುಪಯೋಗಗಳು ಆಗುತ್ತಿದ್ದು, ಸೌಲಭ್ಯಗಳು ಕಾರ್ಮಿಕರಿಗೆ ಸಕಾಲದಲ್ಲಿ ತಲುಪುತ್ತಿಲ್ಲವೆಂಬ ವಿಷಯವು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಅದಕ್ಕಾಗಿ ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತದೆ.<br>• ಆನ್‌ಲೈನ್ ಮೂಲಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರನ್ನು ನೋಂದಾಯಿಸುವ ಹಾಗು ಸೌಲಭ್ಯಗಳನ್ನು ಪಡೆಯುವ ಪ್ರಕ್ರಿಯೆ ಜಾರಿಯಲ್ಲಿದ್ದು, ಪ್ರಸ್ತುತ ಇದನ್ನು ಕಾರ್ಮಿಕ ನಿರೀಕ್ಷಕರುಗಳ ಕಛೇರಿಗಳು / ಸೇವಾ ಸಿಂಧು ಕೇಂದ್ರಗಳು (Common Service Centre - CSC) ಸ್ವತಃ ಕಾರ್ಮಿಕರೇ ನೋಂದಾಯಿಸಿಕೊಳ್ಳಲು ಹಾಗು ಸೌಲಭ್ಯಗಳಿಗಾಗಿ ಅರ್ಜಿ ಸಲ್ಲಿಸಲು ಅವಕಾಶ ಕಲ್ಪಿಸಲಾಗಿದೆ. |

| | | |
|---|---|---|
| | | • ಮಂಡಳಿಯ ಫಲಾನುಭವಿಗಳ ನೋಂದಣಿ, ನವೀಕರಣ ಮತ್ತು ಸೌಲಭ್ಯಗಳನ್ನು ಪಡೆಯಲು ತಂತ್ರಾಂಶದ ಮೂಲಕ ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಆಧಾರ್ ಲಿಂಕ್ ಮಾಡಲಾಗಿದ್ದು ಈ ಮೂಲಕ ದುರುಪಯೋಗವಾಗುವುದನ್ನು ತಡೆಯಲಾಗಿರುತ್ತದೆ.<br>• ಮಂಡಳಿಯ ಫಲಾನುಭವಿಗಳ ನೋಂದಣಿ, ನವೀಕರಣ ಮತ್ತು ಸೌಲಭ್ಯಗಳ ವಿತರಣೆಯನ್ನು ಸಕಾಲ ಯೋಜನಾ ವ್ಯಾಪ್ತಿಗೆ ತಂದು ಕಾಲಮಿತಿಯಲ್ಲಿ ವಿಲೇವಾರಿ ಮಾಡಲು ಕ್ರಮಕೈಗೊಳ್ಳಲಾಗಿರುತ್ತದೆ.<br>• ಮಂಡಳಿಯ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರನ್ನು ಗುರುತಿಸಿ ನೋಂದಣಿ ಮಾಡಿಸಲು, ಕಾನೂನು ಅರಿವು ಮೂಡಿಸಲು ಹಾಗು ಮಂಡಳಿಯ ಸೌಲಭ್ಯಗಳನ್ನು ಫಲಾನುಭವಿಗಳಿಗೆ ತಲುಪಿಸುವ ಸದುದ್ದೇಶದಿಂದ ಸಾಕಷ್ಟು ಪ್ರಚಾರವನ್ನು ಮಾಡಿ ಅನರ್ಹ ಕಾರ್ಮಿಕರು ನೋಂದಣಿಯಾಗಿ ಸೌಲಭ್ಯವನ್ನು ಪಡೆದುಕೊಂಡಿದ್ದು ಕಂಡು ಬಂದಲ್ಲಿ ಕಾನೂನು ರೀತ್ಯ ಕ್ರಮ ಕೈಗೊಳ್ಳಲಾಗುತ್ತದೆ ಎಂದು ಎಚ್ಚರಿಕೆಯನ್ನು ನೀಡಲಾಗಿರುತ್ತದೆ.<br>• ನೋಂದಣಿ ಮತ್ತು ಸೌಲಭ್ಯದ ಅರ್ಜಿಗಳ ಹೆಚ್ಚು ಬಾಕಿ ಇರುವ ಕಛೇರಿಗಳ ಮಾಹಿತಿಯನ್ನು ಕಾಲಕಾಲಕ್ಕೆ ಪಡೆದು ಮಂಡಳಿಯಿಂದ ಅಧಿಕಾರಿಗಳ ತಂಡ ರಚನೆ ಮಾಡಿ ವಿಲೇವಾರಿಗಾಗಿ ಕಳುಹಿಸಲಾಗಿರುತ್ತದೆ.<br>• ನೋಂದಣಿ ಮತ್ತು ಸೌಲಭ್ಯದ ಅರ್ಜಿಗಳ ಹೆಚ್ಚು ಬಾಕಿ ಇರುವ ಕಛೇರಿಗಳ ಪ್ರಗತಿ ಪರಿಶೀಲನೆ ಬಗ್ಗೆ ವಿಡಿಯೋ ಕಾನ್ಫರೆನ್ಸ್ ಸಭೆಗಳನ್ನು ನಡೆಸುವ ಮೂಲಕ ಅಗತ್ಯ ಮಾರ್ಗದರ್ಶನಗಳನ್ನು ಸಂಬಂಧಪಟ್ಟ ಅಧಿಕಾರಿಗಳಿಗೆ ನೀಡಲಾಗುತ್ತಿರುತ್ತದೆ.<br>• ಹೆಚ್ಚು ಅರ್ಜಿಗಳು ಸ್ವೀಕೃತಗೊಳ್ಳುವ ಕಛೇರಿಗಳಿಗೆ ಹೆಚ್ಚುವರಿ ಮಾನವ ಸಂಪನ್ಮೂಲವನ್ನು ಮಂಡಳಿಯಿಂದ ಒದಗಿಸಿ ಶೀಘ್ರದಲ್ಲಿ ಅರ್ಜಿಗಳ ವಿಲೇವಾರಿಗಾಗಿ ಕ್ರಮಕೈಗೊಳ್ಳಲಾಗಿರುತ್ತದೆ. |

**ಕಾಇ 25 ಎಲ್‌ಇಟಿ 2021**

*(ಅರೆಬೈಲ್ ಶಿವರಾಂ ಹೆಬ್ಬಾರ್)*
**ಕಾರ್ಮಿಕ ಸಚಿವರು**

## ಅನುಬಂಧ-1

## ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ವತಿಯಿಂದ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು

1. **ಪಿಂಚಣಿ ಸೌಲಭ್ಯ: ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ** ಮಾಸಿಕ **ರೂ.2,000/-**
2. **ಕುಟುಂಬ ಪಿಂಚಣಿ ಸೌಲಭ್ಯ:** ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ **ರೂ.1000/-**
3. **ದುರ್ಬಲತೆ ಪಿಂಚಣಿ:** ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ **ರೂ.2,000/-** ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ **ರೂ.2,00,000/-** ದವರೆಗೆ ಅನುಗ್ರಹ ರಾಶಿ ಸಹಾಯಧನ.
4. **ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ** ಮರುಪಾವತಿ ಸೌಲಭ್ಯ.
5. **ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ**
6. **ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ:** ನೋಂದಾಯಿತ ಫಲಾನುಭವಿಯ ಅವಲಂಬಿತರಿಗೆ
7. **ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/-** ದವರೆಗೆ ಮುಂಗಡ ಸೌಲಭ್ಯ
8. **ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್):** ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ **ರೂ. 30,000/-** ಮತ್ತು ಗಂಡು ಮಗುವಿನ ಜನನಕ್ಕೆ **ರೂ.20,000/-**
9. **ಶಿಶು ಪಾಲನಾ ಸೌಲಭ್ಯ:**
10. **ಅಂತ್ಯಕ್ರಿಯೆ ವೆಚ್ಚ : ರೂ.4,000/-** ಹಾಗೂ ಅನುಗ್ರಹ ರಾಶಿ **ರೂ.50,000/-**ಸಹಾಯಧನ
11. **ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:**

| ಕ್ರ.ಸಂ | ತರಗತಿ (ಉತ್ತೀರ್ಣಕ್ಕೆ) | ವಾರ್ಷಿಕ ಸಹಾಯ ಧನ | |
|---|---|---|---|
| | | ಗಂಡು | ಹೆಣ್ಣು |
| I. | ನರ್ಸರಿ | 3,000 | 4,000 |
| II. | 1 ರಿಂದ 4ನೇ ತರಗತಿ | 3,000 | 4,000 |
| III. | 5 ರಿಂದ 8ನೇ ತರಗತಿ | 5,000 | 6,000 |
| IV. | 9 ಹಾಗೂ 10ನೇ ತರಗತಿ | 10,000 | 11,000 |
| V. | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 10,000 | 14,000 |
| VI. | ಐಟಿಐ | 12,000 | 15,000 |
| VII. | ಪದವಿ ಪ್ರತಿ ವರ್ಷಕ್ಕೆ | 15,000 | 20,000 |
| VIII. | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 20,000 | 20,000 |
| | ಮತ್ತು ಪ್ರತಿ ವರ್ಷಕ್ಕೆ | 20,000 | 25,000 |
| IX. | ಇಂಜಿನಿಯರಿಂಗ್ ಕೋರ್ಸ್ ಬಿಇ/ ಬಿ.ಟೆಕ್ ಸೇರ್ಪಡೆಗೆ | 25,000 | 25,000 |
| | ಮತ್ತು ಪ್ರತಿ ವರ್ಷಕ್ಕೆ | 25,000 | 30,000 |
| X. | ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ | 30,000 | 30,000 |
| | ಮತ್ತು ಪ್ರತಿ ವರ್ಷಕ್ಕೆ | 40,000 | 50,000 |
| XI. | ಡಿಪ್ಲೋಮಾ | 15,000 | 20,000 |
| XII. | ಎಂ.ಟೆಕ್ / ಎಂ.ಇ | 30,000 | 35,000 |
| XIII. | ಎಂ.ಡಿ (ವೈದ್ಯಕೀಯ) | 45,000 | 55,000 |
| XIV. | ಪಿಹೆಚ್‌ಡಿ (ಪ್ರತಿ ವರ್ಷಕ್ಕೆ) ಗರಿಷ್ಠ 03 ವರ್ಷ | 25,000 | 30,000 |

12. **ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ)**: ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಬಿತರಿಗೆ **ರೂ.300/-** ರಿಂದ **ರೂ.10,000/-ವರೆಗೆ**
13. **ಅಪಘಾತ ಪರಿಹಾರ**: ಮರಣ ಹೊಂದಿದ್ದಲ್ಲಿ **ರೂ.5,00,000/-**, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ **ರೂ.2,00,000/-** **ಮತ್ತು** ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ **ರೂ.1,00,000/-**
14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ)**: ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಇತರೆ ಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ **ರೂ.2,00,000/-**ವರೆಗೆ
15. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್)**: ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ **ರೂ.50,000/-**
16. **LPG ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ)**: ಅನಿಲ ಸಂಪರ್ಕದೊಂದಿಗೆ ಎರಡು ಬರ್ನರ್ ಸ್ಟೌವ್
17. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ**: ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ
18. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ**: ರಾಜ್ಯಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ ( ಈ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದೆ)
19. **ತಾಯಿ ಮಗು ಸಹಾಯ ಹಸ್ತ**: ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ **ರೂ.6,000/-** ಗಳ ಸಹಾಯಧನ.

# ಅನುಬಂಧ-2

| 2007 ರಿಂದ ಡಿಸೆಂಬರ್-2020 ರವರೆಗೆ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳಡಿಯಲ್ಲಿ ವಿತರಿಸಲಾದ ವರ್ಷವಾರು ಸಾಧನೆಯ ವಿವರ | | | | | | | | | | | | |
|---|---|---|---|---|---|---|---|---|---|---|---|---|
| ಸೌಲಭ್ಯಗಳ ವಿವರ | 2007-08 ರಿಂದ 2012-13 ರವರೆಗೆ | | 2013-14 ರಿಂದ 2017-18 ರವರೆಗೆ | | 2018-19 | | 2019-20 | | 2020-21 | | ಒಟ್ಟು | |
| | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| ಶೈಕ್ಷಣಿಕ ಧನಸಹಾಯ | 10,896 | 27,679,600 | 227,489 | 1,038,126,292 | 95,637 | 533,279,365 | 125,403 | 724,788,917 | 72,799 | 517,782,650 | 532,224 | 2,841,656,824 |
| ಮದುವೆ ಧನಸಹಾಯ | 2,126 | 15,160,000 | 23,514 | 1,161,415,000 | 11,380 | 475,875,000 | 10,966 | 453,596,000 | 10,759 | 271,565,000 | 58,745 | 2,377,611,000 |
| ಅಂತ್ಯ ಸಂಸ್ಕಾರಕ್ಕೆ ವೆಚ್ಚ | 1,376 | 20,921,000 | 6,368 | 328,454,619 | 2,208 | 117,282,000 | 3,674 | 198,641,000 | 2,030 | 109,858,000 | 15,656 | 775,156,619 |
| ಪ್ರಮುಖ ವೈದ್ಯಕೀಯ | 233 | 8,104,269 | 2,272 | 63,982,540 | 530 | 12,829,473 | 778 | 22,668,307 | 724 | 26,306,272 | 4,537 | 133,890,861 |
| ಅಪಘಾತ ಪರಿಹಾರ | 195 | 14,777,740 | 185 | 25,574,260 | 58 | 13,781,000 | 116 | 31,957,000 | 106 | 16,634,000 | 660 | 102,724,000 |
| ಹೆರಿಗೆ ಧನಸಹಾಯ | 365 | 2,192,000 | 1,677 | 24,721,500 | 552 | 9,160,000 | 572 | 11,930,174 | 52 | 1,055,000 | 3,218 | 49,058,674 |
| ವೈದ್ಯಕೀಯ ವೆಚ್ಚ | 779 | 742,750 | 268 | 565,048 | 192 | 5,592,698 | 95 | 2,019,557 | 189 | 2,461,973 | 1,523 | 11,382,026 |
| ಉಪಕರಣ ಖರೀದಿಗೆ ಸಾಲ | 3 | 14,890 | 17 | 85,000 | 0 | 0 | 0 | 0 | 0 | 0 | 20 | 99,890 |
| ಪಿಂಚಣಿ ಸೌಲಭ್ಯ | 0 | 0 | 759 | 9,131,000 | 520 | 12,052,000 | 627 | 23,026,000 | 682 | 17,508,000 | 2,588 | 61,717,000 |
| ದುರ್ಬಲತೆ ಪಿಂಚಣಿ | 0 | 0 | 11 | 1,608,000 | 7 | 1,214,000 | 18 | 2,999,000 | 22 | 1,192,000 | 58 | 7,013,000 |
| ಕುಟುಂಬ ಪಿಂಚಣಿ | 0 | 0 | 0 | 0 | 0 | 0 | 0 | 0 | 6 | 7,000 | 6 | 7,000 |
| ಅನಿಲ ಭಾಗ್ಯ | 0 | 0 | 0 | 20,000,000 | 4,055 | 0 | 0 | 0 | 0 | 0 | 4,055 | 20,000,000 |
| ಶ್ರಮ ಸಾಮರ್ಥ್ಯ | 0 | 0 | 1,854 | 83,995,481 | 3,157 | 56,972,953 | 623 | 90,170,239 | 0 | 0 | 5,634 | 231,138,673 |
| ಬಿಎಂಟಿಸಿ ಬಸ್ ಪಾಸ್ | 0 | 0 | 0 | 52,479,000 | 1,602 | 0 | 2,996 | 594,300 | 34,449 | 258,384,000 | 39,047 | 311,457,300 |
| ವಸತಿ ಸೌಲಭ್ಯ | 0 | 0 | 0 | 0 | 0 | 0 | 5,129 | 760,000,000 | 0 | 0 | 5,129 | 760,000,000 |
| ಶಿಶು ಪಾಲನಾ ಕೇಂದ್ರಗಳು | 0 | 0 | 0 | 0 | 0 | 0 | 501 | 3,000,000 | 218 | 5,763,296 | 719 | 8,763,296 |
| ತಾಯಿ ಮಗು ಸಹಾಯ ಹಸ್ತ | 0 | 0 | 0 | 0 | 0 | 0 | 0 | 0 | 14 | 84,000 | 14 | 84,000 |
| **ಒಟ್ಟು** | **15,973** | **89,592,249** | **264,414** | **2,810,137,740** | **119,898** | **1,238,038,489** | **151,498** | **2,325,390,494** | **122,050** | **1,228,601,191** | **673,833** | **7,691,760,163** |